# ಶ್ರೀ ಮಹಾಲಕ್ಷ್ಮಿ



## ಕಕ್ಷ್ಯ – ೨ನೇ ಕಕ್ಷ್ಯ

**ಪೂಜಾದಿನ** – ಶ್ರಾವಣ ಶುಕ್ಲಪಕ್ಷದ ಎರಡನೇ ಶುಕ್ರವಾರ ಅಂದರೆ ಶ್ರಾವಣ ಹುಣ್ಣಿಮೆಯ ಹಿಂದಿನ ಶುಕ್ರವಾರ.

**ಯಾರನ್ನು ಪೂಜಿಸಬೇಕು** –

ನಾವು ಇಂದಿನ ಪೂಜೆಯಲ್ಲಿ ಬರೀ ಮಹಾಲಕ್ಷ್ಮಿಯನ್ನು ಆಹ್ವಾನಿಸಿ ಪೂಜಿಸಬಾರದು. ನಿತ್ಯಾವಿಯೋಗಿಗಳಾದ ಲಕ್ಷ್ಮಿ ಮತ್ತು ಶ್ರೀಮನ್ನಾರಾಯಣರನ್ನು ಒಟ್ಟಿಗೆ ಪೂಜಿಸಬೇಕು. ಹಾಗೆ ಮಾಡದೆ, ಪರಮಾತ್ಮನನ್ನು ತಿಳಿಯದೆ, ಅವನನ್ನು ಆರಾಧಿಸದೆ, ಕೇವಲ ಲಕ್ಷ್ಮಿಯನ್ನು ಆರಾಧಿಸಿದರೆ ಆಕೆ ಅನುಗ್ರಹಿಸುವ ಬದಲು ಶಪಿಸುತ್ತಾಳೆ. ಆದ್ದರಿಂದ ನಾವು ಎಂದಿಗೂ ಮಹಾಲಕ್ಷ್ಮಿಸಮೇತನಾದ ಶ್ರೀಹರಿಯನ್ನೇ ಪೂಜಿಸಬೇಕು.

## ಮಹಾಲಕ್ಷ್ಮಿಯ ಅನ್ಯ ಹೆಸರುಗಳು :-

ಪದ್ಮ, ಕಮಲ, ಪದ್ಮಪ್ರಿಯ, ಪದ್ಮಮುಖಿ, ಪದ್ಮಾಕ್ಷಿ, ಪದ್ಮಹಸ್ತ, ಪದ್ಮಸುಂದರಿ, ವಿಷ್ಣುಪ್ರಿಯ, ರಮಾದೇವಿ, ಇಂದಿರಾ, ಮನುಶ್ರೀ, ಸಮನ, ವೈಷ್ಣವಿ, ಭಾರ್ಗವಿ, ದುರ್ಗಾ, ಶ್ರೀದೇವಿ, ಭೂದೇವಿ, ಚಂಚಲ, ಐಶ್ವರ್ಯ, ಜಗನ್ಮಾತಾ, ಪದ್ಮಾವತಿ,

## ಅಷ್ಟಲಕ್ಷ್ಮಿಯರು –

ಆದಿಲಕ್ಷ್ಮಿ, ಧಾನ್ಯಲಕ್ಷ್ಮಿ, ಧೈರ್ಯಲಕ್ಷ್ಮಿ, ಗಜಲಕ್ಷ್ಮಿ, ಸಂತಾನಲಕ್ಷ್ಮಿ, ವಿಜಯಲಕ್ಷ್ಮಿ, ವಿದ್ಯಾಲಕ್ಷ್ಮಿ, ಧನಲಕ್ಷ್ಮಿ

ಜಗದುದರನತಿ ವಿಮಲ ಗುಣ ರೂ-
ಪಗಳನಾಲೋಚನದಿ ಭಾರತ
ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ
ಬಗೆಬಗೆಯ ನೂತನವ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು

**ಜಗದುದರ** – ಬ್ರಹ್ಮಾಂಡವನ್ನೇ ಉದರದಲ್ಲಿಟ್ಟುಕೊಂಡ ಶ್ರೀಮನ್ನಾರಾಯಣನ **ವಿಮಲಗುಣ**– ಅನಂತಾನಂತ ಜ್ಞಾನ ಆನಂದ ಮುಂತಾದ ಗುಣ **ರೂಪಗಾಳನಾಲೋಚನದಿ–** ರೂಪಗಳನ್ನು ಆಲೋಚನೆಯಿಂದ, **ಭಾರತನಿಗಮ ತತಿಗಳತಿಕ್ರಮಿಸಿ** – ಭಾರತಾದಿ ವೇದಗಳನ್ನು ಅಧಿಕವಾಗಿ ಚಿಂತಿಸುತ್ತ, ಹೊಸಹೊಸ ರೂಪಗಳನ್ನು, **ಕ್ರಿಯಾವಿಶೇಷಗಳ ಬಗೆಬಗೆಯ ನೂತನವ ಕಾಣುತ** ಗುಣಗಳನ್ನು

ಕಾಣುತ್ತ, **ಮಿಗೆ ಹರುಷದಿಂ ಪೊಗಳಿ ಹಿಗ್ಗುವ** –ಬಹು ಸಂತಸದಿಂದ ಸ್ತುತಿಸುತ್ತ ಆನಂದಿಸುವ **ತ್ರಿಗುಣಮಾನಿ ಮಹಾಲಕುಮಿ** – ಸತ್ವರಜಸ್ತಮೋ ಗುಣಗಳಿಗೆ ಅಭಿಮಾನಿಯಾದ ಮಹಾಲಕ್ಷ್ಮಿ (ಶ್ರೀಭೂದುರ್ಗಾ ರೂಪಗಳುಳ್ಳ) **ಸಂತೈಸಲುನುದಿನವು** – ನಿರಂತರವೂ ನಮ್ಮನ್ನು ರಕ್ಷಿಸಲಿ

(ಶ್ರೀಹರಿಕಥಾಮೃತಸಾರ – ಮಂಗಳಾಚರಣಸಂದಿ ೧.೨)

**ನಿತ್ಯಮುಕ್ತಳೆ ನಿರ್ವಿಕಾರಳೆ ನಿತ್ಯಸುಖಸಂಪೂರ್ಣೆ ನಿತ್ಯಾ–**
**ನಿತ್ಯಜಗದಾಧಾರೆ ಮುಕ್ತಾಮುಕ್ತಗಣವಿನುತೆ**
**ಚಿತ್ತಯಿಸು ಬಿನ್ನಪವ ಶ್ರೀಪುರುಷೋತ್ತಮನ ವಕ್ಷೇನಿವಾಸಿನಿ**
**ಭೃತ್ಯುವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ॥ (ಹ.ಕ.ಸಾ. ೩.೨.೨)**

ಶುಭವಿಭ್ರಮೇ ಭುವಿ ಮನೋರಮೇ ರಮೇ
ವಿದಿತಾಗಮೇ ಜಿತಸಮಸ್ತಚಿತ್ತಭ್ರಮೇ ।
ವಿಗತಶ್ರಮೇ ಹರಿಪದಾಬ್ಜಸೇವೋದ್ಯಮೇ
ಶ್ರುತವಿಕ್ರಮೇ ನಿರುಪಮೇ ನಮೋ ನಿರ್ಮಮೇ ॥

***ಶುಭವಿಭ್ರಮೇ***–ಮಂಗಳಕರವಾದ ವಿಲಾಸವುಳ್ಳವಳೇ, **ಭುವಿ ಮನೋರಮೇ ರಮೇ**–ವಿಶ್ವದಲ್ಲಿ **ಎಲ್ಲರಿಗಿಂತಲೂ, ಮನೋಹರಳಾದ ರಮಾದೇವಿಯೇ,** ವಿದಿತಾಗಮೇ – ಸರ್ವಶಾಸ್ತ್ರಗಳನ್ನು ಬಲ್ಲವಳೇ, ಜಿತಸಮಸ್ತಚಿತ್ತಭ್ರಮೇ – ಮಾನಸವಾದ ಭ್ರಮಗಳನ್ನೆಲ್ಲ ಜಯಿಸಿದವಳೇ, ವಿಗತಶ್ರಮೇ –ಶ್ರಮರಹಿತಳೇ, ಹರಿಪದಾಬ್ಜಸೇವೋದ್ಯಮೇ – ಹರಿಪಾದಕಮಲದ ಸೇವೆಯೇ ಉದ್ಯೋಗವಾಗಿ ಉಳ್ಳವಳೇ, ಶ್ರುತವಿಕ್ರಮೇ

– **ಪ್ರಸಿದ್ಧ ಪರಾಕ್ರಮವುಳ್ಳ,** ನಿರುಪಮೇ – **ಉಪಮೆಗೆ ಯಾವ ವಸ್ತುವೂ ಯಾರೂ ಇಲ್ಲದವಳೇ,** ನಿರ್ಮಮೇ – ಮಮಕಾರರಹಿತಳೇ, ರಮಾದೇವಿಯೇ ನಮೋ ನಿನಗೆ ನಮನವು.

( ಶ್ರೀ ಸರಸಭಾರತೀವಿಲಾಸಃ – ಶ್ರೀವಾದಿರಾಜರು )

ರಾ ಗ – ಮ ಧ್ಯ ಮಾ ವ ತಿ : ತಾ ಳ – ಆ ದಿ ತಾ ಳ

ಭಾಗ್ಯದ ಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ ಸೌ–
ಭಾಗ್ಯದ ಲಕ್ಷ್ಮಿ ಬಾರಮ್ಮ । ಪ ।
ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ
ಗೆಜ್ಜೆಯ ಕಾಲಿನ ನಾದವ ತೋರುತ
ಸಜ್ಜನ ಸಾಧು ಪೂಜೆಯ ವೇಳೆಗೆ
ಮಜ್ಜಿಗೆಯೊಳಗಿನ ಬೆಣ್ಣೆಯಂದದಿ । ೧ ।
ಕನಕವೃಷ್ಟಿಯ ಕರೆಯುತ ಬಾರೆ
ಮನಕಾಮನೆಯ ಸಿದ್ಧಿಯ ತೋರೆ
ದಿನಕರ ಕೋಟಿ ತೇಜದಿ ಪೊಳೆಯುವ
ಜನಕರಾಯನ ಕುಮಾರಿ ಬೇಗ । ೨ ।
ಶಂಕೆಯಿಲ್ಲದ ಭಾಗ್ಯವ ಕೊಟ್ಟು
ಕಂಕಣ ಕೈಯ ತಿರುಹುತ ಬಾರೆ
ಕುಂಕುಮಾಂಕಿತೆ ಪಂಕಜಲೋಚನೆ
ವೆಂಕಟರಮಣನ ಬಿಂಕದ ರಾಣಿ । ೩ ।
ಅತ್ತಿತ್ತಗಲದೆ ಭಕ್ತರ ಮನೆಯೊಳು
ನಿತ್ಯ ಮಹೋತ್ಸವ ನಿತ್ಯ ಸುಮಂಗಳ

ಸತ್ಯವ ತೋರುತ ಸಾಧು ಸಜ್ಜನರ
ಚಿತ್ತದಿ ಪೊಳೆಯುವ ಪುತ್ಥಳಿ ಬೊಂಬೆ । ೪ ।
ಸಕ್ಕರೆ ತುಪ್ಪ ಕಾಲುವೆ ಹರಿಸಿ
ಶುಕ್ರವಾರದ ಪೂಜೆಯ ವೇಳೆಗೆ
ಅಕ್ಕರೆಯುಳ್ಳ ಅಳಗಿರಿರಂಗನ
ಚೊಕ್ಕ ಪುರಂದರವಿಟ್ಠಲನ ರಾಣಿ । ೫ ।

ರಾ ಗ – ಮೋ ಹ ನ : ತಾ ಳ – ಆ ದಿ ತಾ ಳ

ಬಾರೆ ಭಾಗ್ಯದ ನಿಧಿಯೆ
ಕರವೀರ ನಿವಾಸಿನಿ ಸಿರಿಯೆ । ಪ ।
ಬಾರೆ ಬಾರೆ ಕರವೀರ ನಿವಾಸಿನಿ
ಬಾರಿಬಾರಿಗು ಶುಭ ತೋರೆ ನಮ್ಮನಿಗೆ । ಅ ಪ ।
ನಿಗಮವೇದ್ಯಳೆ ನೀನು । ನಿನ್ನ
ಪೊಗಳಲಾಪೆನೆ ನಾನು
ಮಗನಪರಾಧವ ತೆಗೆದೆಣಿಸದಲೆ । ಪ–
ನ್ನಗವೇಣಿಯೆ ಲಗುಬಗೆಯಿಂದಲಿ । ೧ ।
ಲೋಕಮಾತೆಯೆ ನೀನು । ನಿನ್ನ
ತೋಕನಲ್ಲವೆ ನಾನು
ಆಕಳು ಕರುವಿನ ಸ್ವೀಕರಿಸುವ ಪರಿ
ನೀ ಕರುಣದಿ ಕಾಲ್ದಾಕು ನಮ್ಮನಿಗೆ । ೨ ।
ಕಡೆಗೆ ನಮ್ಮನಿವಾಸ । ಒಡೆಯನಂತಾದ್ರೀಶ
ಒಡೆಯನಿದ್ದಲ್ಲಿಗೆ ಮಡದಿ ಬಾಹುವುದು
ರೂಢಿಗುಚಿತವಿದು ನಡಿ ನಮ್ಮನಿಗೆ । ೩ ।

ರಾ ಗ – ಆ ನ ಂ ದ ಭೈ ರ ವಿ : ತಾ ಳ – ಆ ದಿ ತಾ ಳ

ಬಾರೆ ನಮ್ಮನಿತನಕ ಭಾಗ್ಯದ ದೇವಿ ।
ಬಾರೆ ನಮ್ಮನಿತನಕ । ಪ ।
ಬಾರೆ ನಮ್ಮನಿ ತನಕ ಬಹಳ ಕರುಣದಿಂದ ಜೋಡಿಸಿ
ಕರಗಳ ಎರಗುವೆ ಚರಣಕ್ಕೆ ।ಅ ಪ ।
ಜರದ ಪೀತಾಂಬರ ನಿರಿಗೆಗಳಲೆಯುತ
ಸರಗಿ ಸರಪು ಚಂದ್ರಹಾರಗಳ್ಹೊಳೆಯುತ । ೧ ।
ಹರಡಿ ಕಂಕಣ ದುಂಡು ಕರದಲ್ಲಿ ಹೊಳೆಯುತ
ತರಳನ ಮ್ಯಾಲೆ ತಾಯಿ ಕರುಣವಿಟ್ಟು ಬೇಗನೆ । ೨ ।
ಮಂದಗಮನೆ ನಿನಗೆ ವಂದಿಸಿ ಬೇಡುವೆ
ಇಂದಿರೇಶನ ಕೂಡ ಇಂದು ನಮ್ಮನಿತನಕ । ೩ ।

ರಾ ಗ – ಶ್ರೀ ರಾ ಗ : ತಾ ಳ – ಛಾ ಪು ತಾ ಳ

ನಮಸ್ತೆ ನಮಸ್ತೆ ನಮಸ್ತೆ ವಿಮಲೆ
ಕೋಮಲೆ ರಮಾದೇವಿ ನಮಸ್ತೆ ನಮಸ್ತೆ । ಪ ।
ತರುಣಿ ಶಿರೋಮಣಿ ನಿನ್ನ ಶೀಲ ಸೌಂದರ್ಯವ
ಧರೆಯೊಳು ವರ್ಣಿಸುವ ಕವಿಯು ದಾವ
ಸ್ವರಮಣನೆನಿಪ ರಮಣನ ಉರದೊಳು ಎಂದೆಂದು
ಅರಮನೆಯ ಮಾಡಿ ಭಾಪುರೆ ಮೆರೆದವಳೆ । ೧ ।
ತನ್ನ ಮೈಯಿಂದ ಮಕ್ಕಳ ಸೃಜಿಸಿ ಯುಗಯುಗದಿ
ನಿನ್ನ ತಾರುಣ್ಯ ಲಾವಣ್ಯಗಳನು
ಮನ್ನಿಸಿ ಪೊರೆವ ಹರಿಯ ಪಟ್ಟದ ರಾಣಿ
ಮಾನ್ಯೆ ಚೈತನ್ಯೆ ಲಾವಣ್ಯೆ ಗುಣಸದನೆ । ೨ ।

ನಿನ್ನಂಗವಪ್ಪಲು ನೋಡಲು ಮುಖವ ಚುಂಬಿಸಲು
ಅನಂತ ಕರ ವಕ್ತ್ರನೇತ್ರ್ರಂಗಳನು
ಪೂರ್ಣ ಹಯವದನ ಕೈಗೊಂಡ ನಿನ್ನಯ ಗಂಡ
ಸ್ವರ್ಣಸಮವರ್ಣೆ ಕರ್ಣಾಯತಾಕ್ಷಿ ।೩।

ರಾಗ – ತೋಡಿ : ತಾಳ – ಆದಿತಾಳ

ಕಾಯೆ ಕರುಣಾಂಬುಧಿಯೆ ಇಂದಿರಾದೇವಿ ।ಪ।
ಕಾಯೆ ಕರುಣಾಂಬುಧಿ ಮಾಯೆ ನಾರಾಯಣನ
ಜಾಯೆ ಸತತ ಜ್ಞಾನವೀಯೆ ಭಕ್ತರ ಪ್ರೀಯೆ ।ಅ ಪ।
ಕನ್ಯಾಮಣಿಯೆ ಕಾಮಿನಿ ಮಂಗಳವಾಣಿ ।
ಸನ್ನುತೆ ಲೋಕಜನನಿ ॥
ನಿನ್ನ ಚರಣಯುಗ್ಮವನ್ನು ನಂಬಿದೆ ಸುಪ್ರ– ।
ಸನ್ನೆ ಸರ್ವಜೀವ ಭಿನ್ನೆ ಭಾಗ್ಯಸಂಪನ್ನೆ ।
ಮನ್ನಿಸು ದಯದಿ ನೀ ಬಿನ್ನಪ ಲಾಲಿಸಿ ।
ಚೆನ್ನೆ ಚಕ್ರಪಾಂಚಜನ್ಯವಿರಾಜಿತೆ ।೧।
ಅತಿ ದಯವಂತೆ ನೀನೆಂದು ಬೇಗದಿ ಬಂದು ।
ತುತಿಸುವೆ ದೀನ ನಾನೆಂದು ॥
ಪತಿತರೊಳಿಡದಲೆ ಗತಿಗೆ ಸಮ್ಮತಳಾಗು–
ತ್ಪತ್ತಿ–ಸ್ಥಿತಿ–ಲಯಕರ್ತೆ ಅತುಳ ಶೋಭನ ಮೂರ್ತೆ ।
ಪತಿಯಲಿ ಜನಿಸಿ ನೀ ಪತಿಗೆ ಸತಿಯಾದೆ ।
ಪತಿಯ ಸಂಗಡ ಧ್ಯಾನಿತಳಾದೆ ಚರಿತೆ ।೨।
ಕುಂಕುಮಾಂಕಿತೆ ರಾಜಿತೆ ನಿಗಮಗೀತೆ ।
ಪಂಕಜಾಸನ ಮಾತೆ ॥

ಲೋಕವತ್ಸಲೆ ಸರ್ವಾಲಂಕಾರಮಯೆ ರವಿ–
ಸಂಕಾಶೆ ಬಹುಕಾಲ ಸಂಕಟವಿನಾಶೆ ॥
ಮಂಕುಮತಿಹರ ವಿಜಯವಿಟ್ಠಲನ ।
ಸಂಕಲ್ಪಕೆ ಕಳಂಕ ಬಾರದೆ ।೩।

ರಾಗ – ಪಂತುವರಾಳಿ : ತಾಳ – ರೂಪಕತಾಳ

ಜಗಪತಿಯ ತೋರಮ್ಮ ಎನಗೆ ಕರುಣವ ಮಾಡಮ್ಮ ।ಪ।
ಅಘಗಳ ಕಳೆವ ಅಮೋಘ ದೇವನ
ಭಕುತರ ಕಾವನ ಎನ್ನಯ ಜೀವನ ।ಅ ಪ।
ಮೃಗಲಾಂಛನವದನೆ ಮೃದು ಸರಸಿಜಸದನೆ
ಹಗಲು ಇರುಳು ನಿನ್ನ ಸಂಯೋಗನ್ನ ।
ಅನಂತ ಭೋಗನ್ನ ಕಿರೀಟಿಯ ಬೀಗನ್ನ ।೧।
ಭ್ರಮರ ಕುಂತಳೆ ಜಾಣೆ ಸುಮನ ಕೋಕಿಲ ಗಾನೆ
ಕಮಲ ತುಲಸಿ ಹಾರನ್ನ ।
ಜಗದಾಧಾರನ್ನ । ದಶಾವತಾರನ್ನ ।೨।
ಅಜರಾಮರಣ ಸಿದ್ಧಿ ತ್ರಿಜಗದೋಳ್ ಪ್ರಸಿದ್ಧಿ
ವಿಜಯವಿಟ್ಠಲ ಶ್ರೀನಿವಾಸನ್ನ ।
ತಿರುವೆಂಗಳೇಶನ್ನ ಜಗವ ಪೋಷನ್ನ ।೩।

## ರಾ ಗ – ತೋ ಡಿ : ತಾ ಳ – ಅ ಟ ತಾ ಳ

ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೊ । ಪ ।
ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು ।ಅ ಪ ।
ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಮಾಡಿ ಪೂರ್ಣ ನೋಟದಿಂದ ಸುಖಿಸುತಿಹಳು। ೧ ।
ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು
ಚಿತ್ರಚರಿತನಾದ ಹರಿಯ ನಿತ್ಯಸೇವೆ ಮಾಡುತಿಹಳು । ೨ ।
ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷರಹಿತನಾದ
ಗರುಡಗಮನನಾದ ಪುರಂದರವಿಟ್ಠಲನ್ನ ಸೇವಿಸುತಿಹಳು । ೩ ।

## ರಾ ಗ – ಕಾ ಂ ಬೋ ದಿ : ತಾ ಳ – ಝ ಂ ಪೆ ತಾ ಳ

ಏನು ಮೆಚ್ಚಿದೆ ಹೆಣ್ಣೆ ಏನು ಮರುಳಾದೆ
ಏನು ಮೆಚ್ಚಿದೆ ಹೆಣ್ಣೆ । ಪ ।
ನೋಟದಿ ಚೆಲುವನಿವನೆಂಬೆನೆ ಚಂಚಲ
ಮಾಟದಿ ಚೆಲುವನಿವನೆಂಬೆನೆ ಬೆನ್ನಿಲಿ ಬುಗುಟು
ಗೂಟದಂತೆ ಹಲ್ಲು ಮೊಳದುದ್ದದ ಮೋರೆ
ಬೂಟಕತನದಲ್ಲಿ ಬಾಯ್ ತೆರೆದು ಅಂಜಿಪಗೆ । ೧ ।
ಅಣುರೂಪದವನಿವ ನಿಲುವುಳ್ಳ ನರನಲ್ಲ
ಬನವ ತರಿವವನಂತೆ ಕೈಯಲ್ಲಿ ಕೊಡಲಿ
ಮನುಜರನು ತಾ ಬಿಟ್ಟು ಕಪಿಗಳನು ಕೂಡುವ
ಮನೆಮನೆಯನು ಪೊಕ್ಕು ಕದ್ದು ತಿಂಬುವಗೆ । ೨ ।

ಗಂಭೀರ ಪುರುಷನಿವನೆಂಬೆನೆ ದಿಗಂಬರ
ಅಂಬರದೊಳಗೆ ಕುದುರೆಯ ಕುಣಿಸುವ
ಅಂಬುಜಾಕ್ಷ ಸಿರಿ ಪುರಂದರವಿಟ್ಠಲನ
ಸಂಭ್ರಮದಿ ನೀ ಮೆಚ್ಚಿ ಮದುವ್ಯಾದಲ್ಲ ।೩।

ರಾಗ – ಶಂಕರಾಭರಣ : ತಾಳ – ಆದಿತಾಳ

ಒಲಿದೆ ಯಾತಕಮ್ಮ ಲಕುಮಿ ವಾಸುದೇವಗೆ ।ಪ।
ಹಲವಂಗದವನ ಹವಣೆ ತಿಳಿದು ತಿಳಿದು ತಿಳಿಯದ್ವಾಂಗೆ ।ಅ ಪ।
ಕಮಲಗಂಧಿ ಕೋಮಲಾಂಗಿ ಸುಂದರಾಬ್ಜವದನೆ ನೀನು
ರಮಣ ಮತ್ಸ್ಯ ಕಠಿಣಕಾಯ ಸೂಕರಾಸ್ಯನು
ರಮಣೀಯ ಸ್ವರೂಪಿ ನೀನು ಅಮಿತ ಘೋರರೂಪನವನು
ನಮಿಪರಿಷ್ಟದಾನಿ ನೀನು ದಾನವ ಬೇಡುವವನಿಗೆ ।೧।
ಜಾಣೆ ರತ್ನಾಕರನ ಮಗಳು ನೀನು ಶುದ್ಧ ಭೃಗುಜನವನು
ಆನಂದಾಬ್ಜ ಸದನೆ ನೀನು ವನವಾಸಿ ಅವನು
ಮಾನೆ ಪತಿವ್ರತೆಯು ನೀನು ನಾನಾಯೋಷಿತ್ಕಾಮಿ ಅವನು
ಜ್ಞಾನೆ ಚಿತ್ರವಸನೆ ನೀನು ಹೀನ ಚೈಲದವನಿಗೆ ।೨।

ಲಲಿತೆ ಚಾರುಶೀಲೆ ನೀನು ಕಲ್ಕಿ ಕಲಹ ಪ್ರಿಯನವನು
ಕುಲದ ಕುರುಹು ಇಲ್ಲ ಗುಣದ ನೆಲೆಯೆ ಕಂಡಿಲ್ಲ
ಹಲವು ಕಾಲದವನು ಅವನ ಬಂಧು ಬಳಗ ನಿಷ್ಕಿಂಚನರು
ಜಲದಿ ಆಲದೆಲೆಯ ಮೇಲೆ ಮಲಗಿ ಬೆರಳ ಸವಿಯುವವನಿಗೆ। ೩ ।

ಅವನ ವಾರ್ತೆ ಕೇಳಿದವರು ಒಲ್ಲರೊ ಸಂಸಾರವನ್ನು
ಅವನ ಮೂರ್ತಿ ನೋಡಿ ಮನೆಯ ಧನವ ಬಿಡುವರು
ಅವನ ಪುರಕೆ ಪೋದ ಜನರು ಒಮ್ಮೆಗನ್ನ ಹಿಂದಿರುಗರು
ಅವನು ತಾನೇ ತನಯರ ತನ್ನವಯುವದಿಂದ ಪಡೆದವನಿಗೆ ।೪।

ಸ್ವರತಾऽನಪೇಕ್ಷಾಕಾಮಿ ನಿದ್ರಹೀನ ಅನಶನಿಯು
ಸ್ಪುರುಶರೂಪ ಶಬ್ದವಾಚ್ಯ ಅಮಿತ ಭೋಕ್ತನು
ಗುರುಗೋಪಾಲವಿಟ್ಠಲನು ನಿರುತ ತನ್ನ ವಕ್ಷಸ್ಥಳದಿ
ಅರಮನೆಯ ಮಾಡಿಕೊಟ್ಟು ಮರುಳು ಮಾಡಿದ ಮಾಯಾವೀಗೆ। ೫ ।

ರಾ ಗ – ಮ ಧ್ಯ ಮಾ ವ ತಿ : ತಾ ಳ – ಆ ದಿ ತಾ ಳ

ಮರುಳು ಮಾಡಿಕೊಂಡೆಯಲ್ಲೆ ಮಾಯಾದೇವಿಯೆ ।ಪ।
ಇರುಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ।ಅಪ।
ಜ್ಞಾನಿಗಳು ನಿತ್ಯ ಅನ್ನಪಾನಾದಿಗಳನ್ನು ಬಿಟ್ಟು
ನಾನಾವಿಧ ತಪವಿದ್ದರು ಧ್ಯಾನಕ್ಕೆ ಸಿಲುಕದವನ ।೧।
ಸರ್ವ ಸಂಗವನು ಬಿಟ್ಟು ಸನ್ಯಾಸಿಯಾದ ಕಾಲಕ್ಕು
ಸರ್ವದಾ ತನ್ನದೆಯ ಮೇಲೆ ಬಿಡದೆ ನಿನ್ನ ಧರಿಸಿಪ್ಪಂತೆ ।೨।
ಪ್ರಳಯಕಾಲದಲ್ಲಿ ಆಲದೆಲೆಯಮೇಲೆ ಮಲಗಿದಾಗ
ಹಲವು ಆಭರಣಗಳು ಜಲವು ಆಗಿ ಜಾಣತನದಿ ।೩।
ರಂಗನು ಭೂಲೋಕದಿ ಭುಜಂಗಗಿರಿಯೊಳಲಮೇಲು
ಮಂಗಪತಿಯಾಗಿ ನಿನ್ನ ಅಂಗೀಕರಿಸುವಂತೆ ।೪।
ಮಕ್ಕಳ ಪಡೆದರೆ ನಿನ್ನ ಚೊಕ್ಕತನವು ಪೋಪುದೆಂದು
ಪೊಕ್ಕಳೊಳು ಮಕ್ಕಳ ಪಡೆದು ಕಕ್ಕುಲಾತಿಪಡುವಂತೆ ।೫।

ಎಡಕೆ ಭೂಮಿ ಬಲಕೆ ಶ್ರೀಯು ಎದುರಿನಲ್ಲಿ ದುರ್ಗಾದೇವಿ
ತೊಡೆಯಮೇಲೆ ಲಕುಮಿಯಾಗಿ ಬಿಡದೆ ನಿನ್ನ ಮುದ್ದಾಡಿಪಂತೆ। ೬ ।
ಎಂದೆಂದಿಗೂ ಮರೆಯೆ ನಿನ್ನಾನಂದದಿ ಜನರಿಗೆಲ್ಲ
ತಂದು ತೋರೆ ಸ್ವಾಧೀನ ಪುರಂದರವಿಟ್ಠಲರಾಯನ । ೭ ।

ರಾ ಗ – ಪೀ ಲು : ತಾ ಳ – ದಾ ದ ರ

ನಮ್ಮಮ್ಮನ ಕಂಡೆ ಬೊಮ್ಮನ ಪಡೆದಿಹಳ । ಪ ।
ಅಮ್ಮನ ಕಂಡೆನಗೆ ಅಮೃತ ಪಾನವಾಯಿತು
ಸಂಭ್ರಮದಿಂದಲೆನಗೆ ಬ್ರಹ್ಮಾಂಡದೊಳು । ೧ ।
ಆಹ್ಲಾದವಾಯಿತಿಂದು ಫುಲ್ಲಲೋಚನೆಯ ಕಂಡು
ಉಲ್ಲಾಸ ತುಂಬಿತೆನಗೆ ಮೂಲೋಕದೊಳು । ೨ ।
ಮಾತೃ ಪಿತೃವೆಂಬುದು ಸೂತ್ರಧಾರಿ ತಾನೊಬ್ಬಳೆ
ಅಂತ್ರ ಬಾಹ್ಯದಲೆನಗೆ ಪುತ್ರ ಮಹಿಪತಿಗೆ । ೩ ।

ರಾ ಗ – ಮ ಧ್ಯ ಮಾ ವ ತಿ : ತಾ ಳ – ತ್ರಿ ಪು ಟ ತಾ ಳ

ರಮಾಸಮುದ್ರನ ಕುಮಾರಿ ನಿನ್ನ ಸರಿ
ಸಮಾನರ್ಯಾರಮ್ಮ । ಪ ।
ಉಮೇಶ ಮೊದಲಾದ ಅಮರನಿಕರವು
ಭ್ರಮಿಸಿ ನಿನ್ನ ಪಾದಕಮಲ ಪೂಜಿಪರಮ್ಮ । ಅ ಪ ।
ಅಪಾರ ಮಹಿಮನ ವ್ಯಾಪಾರಂಗಳ
ತಿಳಿದು ಕಾಪಾಡುವೆ ಜಗವ
ಕೋಪಾರಹಿತಳಾಗಿ ಶ್ರೀಪತಿಯೊಳು ಎಮ್ಮ
ತಾಪತ್ರಯವ ಪೇಳಿ ಪೋಷಿಸಬೇಕಮ್ಮ । ೧ ।

ಕರುಣಾ ವಾರಿಧಿಯೆಂದು ಶರಣಾಜನರು
ನಿನ್ನ ಸ್ಮರಣೆಯ ಮಾಡುವರೆ
ಹರಿಣಾಕ್ಷಿ ಕೇಳೆಲೆ ಹರುಷದಿಂದಲಿ ಹರಿ
ಚರಣಾವ ತೋರಿ ಅಘ ಹರಣಾವ ಮಾಡಿಸಮ್ಮ । ೨ ।

ವಾಸಾವನುತ ಸಿರಿ ಶೇಷವಿಟ್ಠಲನೊಳು
ವಾಸಾವ ಮಾಡುವಳೆ
ಘಾಸಿಗೊಳಿಸದೆಲೆ ಈ ಸಮಯದಲಿ
ವಾಸುದೇವಗೆ ಪೇಳಿ ಪೋಷಿಸಬೇಕಮ್ಮ । ೩ ।

ರಾ ಗ – ಕಾ ಂ ಬೋ ದಿ : ತಾ ಳ – ಅ ಟ ತಾ ಳ

ಹೊಸ ಕಣ್ಣು ಎನಗೆ ಹಚ್ಚಲಿಬೇಕು
ಜಗದಂಬ ವಸುದೇವ ಸುತನ ಕಾಂಬುದಕೆ । ಪ ।
ಘಸಣೆಯಾಗಿದೆ ಭವ ವಿಷಯ ವಾರಿಧಿಯಲ್ಲಿ
ಶಶಿಮುಖಿ ಕರುಣದಿ ಕಾಯೆ । ಅಪ ।
ಪರರ ಅನ್ನವನುಂಡು ಪರರ ಧನವ
ಕೊಂಡು ಪರಿಪರಿ ಕ್ಲೇಷಗಳುಂಡೆ
ವರಲಕ್ಷ್ಮಿ ನಿನ್ನ ಚಾರುಚರಣವ ಮೊರೆಹೊಕ್ಕೆ
ಕರುಣದಿ ಕಣ್ಣೆತ್ತಿ ನೋಡೆ । ೧ ।
ಮಂದಹಾಸಿನಿ ಭವ ಸಿಂಧುವಿನೊಳಗಿಟ್ಟು
ಚಂದವೆ ಅಮ್ಮ ನೋಡುವುದು
ಕಂದನಂದದಿ ಬಾಲ್ಯದಿಂದ ಸೇರಿದೆ ನಿನ್ನ

ಮಂದರೋದ್ಧರನ ತೋರಮ್ಮ ।೨।
ಅಂದಚೆಂದಗಳೊಲ್ಲೆ ಬಂಧುಬಳಗ ಒಲ್ಲೆ
ಬಂಧನಕೆಲ್ಲ ಕಾರಣವು
ಇಂದಿರೇಶನ ಪಾದದ್ವಂದ್ವವ ತೋರಿಸು ಹೃ
ನ್ಮಂದಿರದಲ್ಲಿ ಬೇಗ ।೩।

ರಾಗ – ಪೀಲು : ತಾಳ – ಖಂಡಛಾಪುತಾಳ

ಕೋಮಲೆ ರಮಾದೇವಿಯ ನೋಡಬನ್ನಿರೆ
ಕಮಲಾರಿಸಹೋದರಿಯನೀಗ ಬೇಡಬನ್ನಿರೆ ।ಪ।
ಇಂದುನಿಭದ ಸುಂದರಿಯರು ಬಂದು ನೋಡಿರೆ ಈ
ಕುಂದರದನೆ ಮಂದರೋದ್ಧರನರ್ಧಾಂಗಿಯೆ ।೧।
ಭಕ್ತಿಯಿಂದ ಭಜಿಪರಿಗೆ ಮುಕ್ತಿಕೊಡುವಳೆ
ಶಕ್ತಿಯುಕ್ತಿಗಳನೆ ಕೊಟ್ಟು ಅರ್ತಿ ಮಾಳ್ಪಳೆ ।೨।
ದಾಸನಾದರೆ ಶ್ರೀಶನರಾಣಿ ಪೋಷಿಸುವಳೆ
ಗೋಪಾಲವಿಟ್ಠಲ ಘಾಸಿಮಾಡದೆ ಪೋಷಿಸುವಳೆ ।೩।

ರಾಗ – ಮಧ್ಯಮಾವತಿ : ತಾಳ – ತ್ರಿವಿಡೆ

ಮುದ್ದು ಮಾಡಲರಿಯೆ ಮುದ್ದು ರಮಾದೇವಿ ।ಪ।
ಮುದ್ದು ಬಾಲಕೃಷ್ಣನಲ್ಲಿ ಮನ ಸಿದ್ಧವಾಗಿ ನಿಲ್ಲುವಂತೆ ।ಅಪ।
ವಚನಗಳೆಲ್ಲ ವಾಸುದೇವನ ಕಥೆಯೆಂದು
ರಚನೆ ಮಾಡುವರಲ್ಲಿ ರಕ್ತಿ ನಿಲ್ಲೋ ಹಾಂಗೆ ।೧।
ಸಂತೆ ನೆರಹಿದ ಸತಿ ಸುತರು ತನ್ನವರೆಂದು

ಭ್ರಾಂತಿ ಬಿಟ್ಟು ನಿಶ್ಚಿಂತನಾಗೋ ಹಾಂಗೆ ।೨।
ಎನ್ನೊಡೆಯ ಸಿರಿ ಪುರಂದರವಿಟ್ಠಲನ್ನ
ಸನ್ಮತಿಯಿಂದ ನಾ ಹಾಡಿ ಪಾಡೋ ಹಾಂಗೆ ।೩।

ರಾಗ – ಕಾಂಬೋದಿ : ತಾಳ – ಅಟತಾಳ

ನಿನಗಿಂತ ಕುಂದೇನೊ ನಮ್ಮಮ್ಮ ಜಯಲಕ್ಷ್ಮಿ ? ।ಪ।
ಮತ್ಸ್ಯಾವತಾರ ನೀನಾದರೆ – ಆಕೆ
ಮತ್ಸ್ಯಗಂಗಳೆ ತಾನಾದಳೊ
ಹೆಚ್ಚಿನ ಶಂಖವ ಪಿಡಿದರೆ – ಆಕೆ
ನಿಚ್ಚ ಶಂಖದ ಕಂಠಳಾದಳಯ್ಯ ।೧।
ನೀಲವರ್ಣ ನೀನಾದರೆ – ಆಕೆ
ನೀಲಕುಂತಳೆ ತಾನಾದಳೊ
ಲೋಲಕಮಲನಾಭನಾದರೆ – ಆಕೆ
ಬಾಲಕಮಲಮುಖಿಯಾದಳಯ್ಯ ।೨।
ಬೆಟ್ಟವ ನೀನೊಂದು ಪೊತ್ತರೆ – ಕುಚದ
ಬೆಟ್ಟಗಳೆರಡುನು ತಾ ಪೊತ್ತಳೊ
ದಿಟ್ಟ ಶೇಷನ ನೀ ತುಳಿದರೆ – ಆಕೆ
ಕಟ್ಟಿ ಬಾಸೆಗೆ ಶೇಷನ ನಿಲಿಸಿಹಳಯ್ಯ ।೩।
ಗಜರಾಜವರದ ನೀನಾದರೆ – ಆಕೆ
ಗಜಗಮನೆಯು ತಾನಾದಳಯ್ಯ
ನಿಜವಾದ ಸಿಂಹ ನೀನಾದರೆ – ಆಕೆ
ಭಜಿಸಿ ಸಿಂಹಮಧ್ಯೆಯಾಗಿಪ್ಪಳಯ್ಯ ।೪।
ಈ ಪರಿಯಲಿ ಬಹು ಜನಿಸಿದೆ – ಭಲೆ

ಭಾಪುರೆ ಬಾಡದೊಳ್ ನೆಲೆಸಿದೆ
ಗೋಪಿಯರ ಮೋಹ ಸಲಿಸಿದೆ – ಚೆಲುವ
ಶ್ರೀಪತಿ ಆದಿಕೇಶವರಾಯ ಮೆರೆದೆ । ೫ ।

## ರಾಗ – ತೋಡಿ ತಾಳ – ಆದಿತಾಳ

ಶ್ರೀಮಹಾ ಲಕ್ಷ್ಮೀ ದೇವಿಯೇ ಕೊಮಲಾಂಗಿಯೇ
ಸಾಮಗಾಯನ ಪ್ರಿಯಳೇ । ಪ ।
ಹೇಮಗರ್ಭಕಾಮಾರಿಶಕ್ರಸುರಸ್ತೋಮ ವಂದಿತೆ –
ಸೋಮಸೋದರಿಯೇ ॥ಅ.ಪ॥
ಸಕಲ ಶುಭಗುಣ ಭರಿತಳೆ ಏಕ ದೇವಿಯೇ ವಾಕುಲಾಲಿಸಿ ನೀ ಕೇಳೇ ।
ಲೋಕನಾಥನ ಗುಣ ಲೀಲೇ ಕೊಂಡಾಡುವಂಥ
ಏಕಮನವ ಕೊಡು ಶುಭಶೀಲೆ ॥
ಬೇಕುಬೇಕು ನಿನ್ನ ಪತಿಪಾಬ್ಜವ ಏಕಾಂತದಲಿ
ಭಜಿಪರ ಸಂಗವ ಕೊಡು ।
ಲೋಕದ ಜನರಿಗೆ ನಾ ಕರವೊಡ್ಡದಂತೆ
ತಾಯೇ ಕರುಣಿಸು ರಾಕೇಂದುವದನೆ ॥೧॥
ಮಂದರಧರನಅರಸಿಯೇ ಇಂದಿರೆ
ಎನ್ನ ಕುಂದುದೋಷಗಳನೀ ತರಿಯೆ ।
ಅಂದುಳ್ಳ ಸೌಭಾಗ್ಯದಸಿರಿಯೇ ನಿನ್ನ

ಕಂದನೆಂದು ಮುಂದಕ್ಕೆ ಕರೆಯೋ ॥

ಬಂದು ನೀಕರುಣಿಸು ವಂದಿಸುವೆನುನಾ

ಸಿಂಧುಸುತಳೇ ನಿತ್ಯಸಿಂಧೂರ ಗಮನೇ।

ಸಿಂಧುಶಯನ ಶ್ರೀ ವಿಜಯವಿಠ್ಠಲನ ಎಂದೆಂದಿಗು

ಮನದಿಂದ ಅಗಲದಂತೆ ॥ ೨ ॥

# ಕಾಯೋ ಕಮಲಾಲಯೋ

ಕಾಯೋ ಕಮಲಾಲಯೋ ಮಧು ಮಥನ ಸತಿಯೆ । ಪ ।

ಕಾಯಜಾತನ ತಾಯೆನಮಿಸುವೆ

ಕಾಯೆ ತ್ರಿಜಗಕೆ ತೋಯ ಜಾಂಬಕಿ । ಅ.ಪ ।

ತೋಯಜಾಸನ ಮುಖ್ಯ ತ್ರಿದಶ ನಿ

ಕಾಯ ಸಂಶೇವಿತಳೆ ಬೇಡುವೆ

ಹೇಯ ವಿಷವನ ಮರೆಸಿ ಹರಿಪದ

ತೋಯಜಕೆ ಮನವೆರಗುವಂದದಿ । ೧ ।

ಘೋರತರ ಸಂಸಾರ ಶ್ರಮ ಪರಿ

ಹಾರ ಮಾಳ್ಪ ಸಮೀರ ಸಮಯದಿ

ಸಾರವನು ಸುಜನರಿಗೆ ಬೋಧಿಪ

ಸೂರಿಗಳ ಸಹವಾಸ ಪಾಲಿಸಿ । ೨ ।

ಭಾರ್ಗವಿಯೆ ಕಾಮಾದಿ ಷಡ್ರಿಪು

ವರ್ಗವನು ಗೆಲುವದಕೆ ಗುರುಗಳ–

ನು ಗ್ರಹಿಸಿ ಸುಜ್ಞಾನ ಭಕುತಿ ವೈ
ರಾಗ್ಯ ವೆಂಬುವ ಭಾಗ್ಯ ಒದಗಿಸಿ ।೩।
ರಾಮನರಸಿಯೆ ನಿಮ್ಮ ಶುಭಪದ
ತಾಮರಸವನು ಬಿಡದೆ ಪೂಜಿಪ
ಕಾಮಿನೀ ಜನ ಸ್ತೋಮಕನುದಿನ
ಕಾಮಿತಾರ್ಥಗಳಿತ್ತು ಕರುಣದಿ ।೪।
ಮಂಗಳಪ್ರದ ಕೃಷ್ಣವೇಣಿ ತರಂಗ
ಶೋಭಿತ ಕಾರ್ಪರಾಲಯ
ತುಂಗ ಮಹಿಮ ವಿಹಂಗ ರಾಜ ತು
ರಂಗ ಶ್ರೀ ನರಸಿಂಗ ನರಸಿಯೆ ।೫।
(ಕಾರ್ಪರ ನರಸಿಂಹದಾಸರ ಕೃತಿ)

# ಜಯ ಜಯ ಶ್ರೀಹರಿಪ್ರಿಯೆ

ಜಯ ಜಯ ಶ್ರೀಹರಿಪ್ರಿಯೆ ಜಯಕ್ಷೀರಾಂಬುಧಿತನಯೇ
ಜಯ ಜಯ ಕೋಮಲಕಾಯೆ ಬಿಡದೆನ್ನನು ಕಾಯೆ ।ಪ।
ಜಯ ರತ್ನಾಕರ ತನಯೆ ಕುರುಕರುಣಾಮಯಿ ಸದಯೆ
ಹರಿ ವಕ್ಷ ಸ್ಥಳ ನಿಲಯೆ ಸುರಮುಖಿಗೇಯೆ ।೧।
ಜಯ ಜಯ ಪಾವನ ಚರಿತೆ ಜಯಚತುರಾನನ ಮಾತೆ
ಜಯ ಭಕುತಾಭಯ ದಾತೆ ನಮಿಸುವೆ ಭೂಜಾತೆ ।೨।
ಜಯ ಜಯ **ಕಾರ್ಪರ ಸದನೆ ಜಯನರಸಿಂಹನ** ರಾಣಿ
ಸುರಸಂಶೇವಿತಚರಣೆ ಪಾಹಿಜಗಜ್ಜನನಿ ।೩।
**(ಕಾರ್ಪರ ನರಸಿಂಹದಾಸರ ಕೃತಿ)**

# ಶ್ರೀಮಹಾಲಕ್ಷ್ಮಿತಾಯೇ

ಶ್ರೀಮಹಾಲಕ್ಷ್ಮಿತಾಯೇ । ಶ್ರೀ ಮಹಾಮಾಯೆ ।
ಹೇಮಾಯಾ ಕರುಣಾಬ್ಧಿಯೇ । ಕಾಮಿತ ಫಲನೀಯೇ ।
ಸಾಮಜಗಮನಿಯೇ । ಹೇಮಾಯಾ ಕೋಟಿ ಸಮಕಾಯೇ ।
ಶುಭಚರಿಯ । ಬಹುಪರಿಯೇ । ಹರಿಪ್ರೀಯೇ ।

ಅರಿಯೇ ಪಶರಧಿಸುತವನೇ । ಸರಸಿಜಸದನೆ ।
ಸುರಚಿರದವರಾನೆ । ಕರಿಸರ್ಪವೇಣೆ ।
ದುರಿತಾದೌಘಪಹರಣೆ । ಕರುಣದಾಗಾರೆ ಶರಣೆ ।
ನೆರೆನಿನ್ನನಂಬಿದೆನೆ ಮಾತೆ । ಅದ್ಭುತೆ ।
ರವಿನಮಿತೆ । ಪ್ರಖ್ಯಾತೆ । ದಾತೆ ।೧।
ಹೊಳೆವ ಸೌಂದರ್ಯ ಸಲಹೆ । ಸಲೆಕುಲದ್ಯೆವೆ ।
ಚಲುವ ಸುಜನ ಸೇವೆ । ಮಲಿನರ ಭಾವೆ ।
ಹಲವು ಮಾತೇನು ಫಲವೇ । ಬಲುನಾಹಂಬಲಿಸುವೆ ।
ಒಲಿದು ಕರುಣಿಸು ಭಾಗ್ಯವಂತೆ । ಗುಣವಂತೆ ।
ಬಹುಶಾಂತೆ । ದಯವಂತೆ ಕಾಂತೆ ।೨।
ಕರವೀರ ಪುರಧೀಶೆ । ಶರಣರುಲ್ಲಾಸೆ ।
ಸುರಮುನಿ ಜನತೋಷೆ । ಶಿರಸ್ವಪ್ರಕಾಶೆ ।
ಪರತರ ಸುವಿಲಾಸೆ । ಗುರುಕೃಷ್ಣಸುತನೀಶೆ ।
ವರಕೊಲ್ಹಾಸುರನ ವಿನಾಸ । ಜಗದೀಶೆ ।
ಮೃಧುಭಾಷೆ ।ಅವಿನಾಶೆ । ಈಶೆ ।೩।

(ಗುರುಕೃಷ್ಣಸುತಾಂಕಿತಕೃಷ್ಣದಾಸರ ಕೃತಿ)

## ಆಡುತ್ತಾ ಬಾರಮ್ಮಾ

ಆಡುತ್ತಾ ಬಾರಮ್ಮಾ ನಲಿದಾಡುತ್ತಾ ಬಾರಮ್ಮಾ
ಆಡುತ್ತವರಗಳಾ ನೀಡುತ್ತಾ ಕರುಣಾದಿ
ನೋಡುತ್ತಾ ದಯದಿಂದಾ
ಲಕ್ಷ್ಮಿ ಆಡುತ್ತಾಬಾರಮ್ಮಾ ।ಪ।
ಬೇಸರವು ಬೇಡಮ್ಮಾ ದಾಸರ ದಾಸಿಯು ನಾನಿಮ್ಮ
ವಾಸನಪೂರಿತೆ ವನರೂಹನೇತ್ರೆ
ಸಾಸಿರನಾಮದ ವಾಸುದೇವನ
ಸತಿ ಆಡುತ್ತಾಬಾರಮ್ಮಾ ನಲಿದಾಡುತ್ತಾ ಬಾರಮ್ಮಾ ।೧।
ಕರದಾರವೊಯೆಂದು ತಾಯೆ ಎನ್ನ
ಮೊರೆಯಲಾಲಿಸೆ ನೀ ಬಂದು
ದುರಿತಗಳಾನೆಲ್ಲಾ ಪರಿಹರಿಸುವ ನಿಮ್ಮ
ಕರುಣಾಮೃತವನು ಸ್ಮರಿಸುವೆ ಅನುದಿನ ಆಡುತ್ತಾ ಬಾರಮ್ಮಾ ।೨।
ಧರಣಿಯೊಳುನ್ನತವಾದ ಹೆಳವನಾಕಟ್ಟೆ
ಗಿರಿಯೊಳು ನೆಲಸಿದ ಪರಮ ಪವಿತ್ರಳ
ಕರುಣಾ ಸಿಂಧುವೆ ವರವನು ಕೊಡುತ್ತಾ
ಬೇಗಾದಿಂದಲಿ ಆಡುತ್ತಾ ಬಾರಮ್ಮಾ ।೩।
(ಹೆಳವನಕಟ್ಟೆ ಗಿರಿಯಮ್ಮನವರ ರಚನೆ)

---

ರಾಗ – ಮುಖಾರಿ ತಾಳ – ಛಾಪುತಾಳ
ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೆ
ಶೃಂಗಾರಪುರುಷರು ಬಹುಮಂದಿ ಇರಲು ।ಪ।

ಗುಷ್ಟುನಾರುವ ಮೈಯಿ ಬಿಟ್ಟಿದ್ದ ಬಿರುಗಣ್ಣು
ಮುಟ್ಟಿನೋಡಿದರೆ ಮೈಯ್ಯತಿ ಕಠಿನವು
ಸೊಟ್ಟ ಮೋರೆಯು ಇವಗೆಷ್ಟುದ್ದ ಹಲ್ಲುಗಳು
ಇಷ್ಟು ಘೋರಮುಖದಳಿಯನೆಲ್ಲಿ ದೊರಕಿದನು । ೧ ।
ಬಡವನು ಭಿಕ್ಷುಕನು ಬಡವನಂದದಿ ಕೋಪವು
ನೋಡಿದರೆ ತಲೆಯು ಜಟೆಯು ಕಟ್ಟಿಹುದು
ಬೆಡಗು ನುಡಿಗಾರ ಜಾರ ಚೋರನಿಗೆ
ನೋಡಿ ನೋಡಿ ಹೆಣ್ಣ ಹ್ಯಾಂಗೆ ಕೊಟ್ಟನು । ೨ ।
ಭಂಡನಾಗಿರುವನು ಕಂಡವರೊಡನೆ ಕಾಳಗವ
ಕೊಂಡು ಬಹಬಲು ಉದ್ದಂಡನಿವನು
ಅಂಡಜವಾಹನಗೆ ಯೋಗ್ಯವಾದ ಹೆಣ್ಣ ಕಂಡ
ಕಂಡೀ ಹಯವದನಗೆ ಕೊಟ್ಟನ್ಹ್ಯಾಗೆ । ೩ ।

---

## ಕೊಲ್ಹಾಪುರ ಲಕ್ಷ್ಮೀಸ್ತುತಿ

ಜಯ ಕೋಲ್ಹಾಪುರನಿಲಯೇ ಭಜದಿಷ್ಟೇತರವಿಲಯೇ ।
ತವ ಪಾದೌ ಹೃದಿ ಕಲಯೇ ರತ್ನರಚಿತವಲಯೇ । ೧ ।
ಜಯ ಜಯ ಸಾಗರಜಾತೇ ಕುರು ಕರುಣಾಂ ಮಯಿ ಭೀತೇ ।
ಜಗದಂಬಾಭಿದಯಾ ತೇ ಜೀವತಿ ತವ ಪೋತೇ । ೨ ।
ಜಯ ಜಯ ಸಾಗರಸದನೇ ಜಯ ಕಾಂತ್ಯಾ ಜಿತಮದನೇ ।
ಜಯ ದುಷ್ಟಾಂತಕಕದನೇ ಕುಂದಮುಕುಲರದನೇ । ೩ ।
ಸುರರಮಣಿನುತಚರಣೇ ಸುಮನ: ಸಂಕಟಹರಣೇ ।

ಸುಸ್ವರರಂಜಿತವೀಣೇ ಸುಂದರನಿಜಕಿರಣೇ ।೪।
ಕುಂಕುಮರಂಜಿತಫಾಲೇ ಕುಂಜರಬಾಂಧವಲೋಲೇ ।
ಕಲಧೌತಾಮಲಚೇಲೇ ಕೃಂತಕುಜನಜಾಲೇ ।೫।
ಭಜದಿಂದೀವರಸೋಮೇ ಭವಮುಖ್ಯಾಮರಕಾಮೇ ।
ಭಯಮೂಲಾಳಿವಿರಾಮೇ ಭಂಜಿತಮುನಿಭೀಮೇ ।೬।
ಧೃತಕರುಣಾರಸಪೂರೇ ಧನದಾನೋತ್ಸವಧೀರೇ ।
ಧ್ವನಿಲವನಿಂದಿತಕೀರೇ ಧೀರದನುಜದಾರೇ ।೭।
ಸುರಹೃತ್ಪಂಜರಕೀರೇ ಸುಮಗೇಹಾರ್ಪಿತಹಾರೇ ।
ಸುಂದರಕುಂಜವಿಹಾರೇ ಸುರವರಪರಿವಾರೇ ।೮।
ವರಕಬರೀಧೃತಕುಸುಮೇ ವರಕನಕಾಧಿಕಸುಷಮೇ ।
ವನನಿಲಯಾದಯಭೀಮೇ ವದನವಿಜಿತಸೋಮೇ ।೯।
ಮದಕಲಭಾಲಸಗಮನೇ ಮಧುಮಥನಾಲಸನಯನೇ ।
ಮೃದುಲೋಲಾಲಕರಚನೇ ಮಧುರಸರಗಾನೇ ।೧೦।
ವ್ಯಾಘ್ರಪುರೀವರನಿಲಯೇ ವ್ಯಾಸಪದಾರ್ಪಿತಹೃದಯೇ ।
ಕುರುಕರುಣಾಂ ಮಯಿ ಸದಯೇ ವಿವಿಧನಿಗಮಗೇಯೇ ॥ ೧೧ ॥

---

**ರಾಗ – ಕಲ್ಯಾಣಿ ತಾಳ – ಆದಿತಾಳ**

ಆರಿಗೆ ವಧುವಾದೆ ಅಂಬುಜಾಕ್ಷಿ –
ಕ್ಷೀರಾಬ್ಧಿಕನ್ನಿಕೆ ಶ್ರೀಮಹಾಲಕುಮಿ ।ಪ।
ಶರಧಿಬಂಧನ ರಾಮಚಂದ್ರ ಮೂರುತಿಗೊ
ಪರಮಾತ್ಮ ಶ್ರೀಅನಂತಪದ್ಮನಾಭನಿಗೊ

ಸರಸಿಜನಾಭ ಶ್ರೀಜನಾರ್ಧನಮೂರುತಿಗೋ
ಎರಡು ಹೊಳೆಯ ರಂಗಪಟ್ಟಣವಾಸಿಗೋ ।೧।
ಚೆಲುವ ಬೇಲೂರ ಚೆನ್ನಿಗರಾಯನಿಗೊ ಕೆಳದಿ
ಹೇಳುಡುಪಿಯ ಕೃಷ್ಣರಾಯನಿಗೊ
ಇಳೆಯೊಳು ಪಂಢರಾಪುರ ನೆಲೆಯ ವಿಠಲೇಶಗೊ
ನಳಿನಾಕ್ಷಿ ಹೇಳು ಬದರೀನಾರಾಯಣನಿಗೊ ।೨।
ಮಲಯಜಗಂಧಿ ಬಿಂದುಮಾಧವರಾಯಗೊ
ಸುಲಭದೇವರ ದೇವ ಪುರುಷೋತ್ತಮನಿಗೊ
ಫಲದಾಯಕ ನಿತ್ಯಮಂಗಳನಾಯಕಗೊ
ಚೆಲುವೆ ನಾಚದೆ ಪೇಳು ಶ್ರೀವೆಂಕಟೇಶಗೊ ।೩।
ವಾಸವಾರ್ಚಿತ ಕಂಚಿ ವರದರಾಜಮೂರುತಿಗೊ
ಅಸುರಾರಿ ಶ್ರೀಮುಷ್ಣದಾದಿವರಾಹನಿಗೊ
ಶೇಷಶಾಯಿಯಾದ ಶ್ರೀರಂಗನಾಯಕಗೊ
ಸಾಸಿರನಾಮದೊಡೆಯ ಆಳಗಿರೀಶನಿಗೊ ।೪।
ಶರಣಾಗತರ ಪೊರೆವ ಸಾರಂಗಪಾಣಿಗೊ
ವರಗಳೀವ ಶ್ರೀನಿವಾಸಮೂರುತಿಗೊ
ಕುರುಕುಲಾಂತಕ ರಾಜಗೋಪಾಲಮೂರುತಿಗೊ
ಸ್ಥಿರವಾದ ಪುರಂದರವಿಠಲರಾಯನಿಗೊ ।೫।

## ರಾಗ – ಮಧ್ಯಮಾವತಿ ತಾಳ – ಆಟತಾಳ

ಪಾಲಿಸೆ ಪದುಮಾಲಯೆ ನೀನೇ ಗತಿ । ।ಪ।
ಬಾಲಕನು ತಾನಾಗಿ ಗೋಪಿಗೆ

ಲೀಲೆಯಿಂದಲಿ ನಂದಗೋಕುಲ–
ಬಾಲೆಯರ ಮೋಹಿಸುತ ಅಸುರರ
ಕಾಲನೆನಿಸಿದ ಬಾಲಕನ ಪ್ರಿಯೆ ।ಅ।
ಅನ್ಯರ ನೆನೆಯಲೊಲ್ಲೆ ನಿನ್ನಯ ಪಾದ–
ವನ್ನು ನಂಬಿದೆ ನೀ ಬಲ್ಲೆ ತಡಮಾಡದೆ
ಚೆಣ್ಣ ಕರೆಯಲು ಘನ್ನಮಹಿಮನು
ಉನ್ನತದ ರೂಪಿನಲಿ ಗುಣಸಂ–
ಪನ್ನ ರಕ್ಕಸರನ್ನು ಸೀಳಿದ
ಪನ್ನಗಾದ್ರಿನಿವಾಸೆ ಹರಿಪ್ರಿಯೆ ।೧।
ಅರಿಯದ ತರಳನೆಂದು ಶ್ರೀಪತಿ ಸತಿ
ಕರುಣದಿ ಸಲಹೆ ಬಂದು ಕರುಣಾಸಿಂಧು
ಸರಸಿಜಾಸನ ರುದ್ರರೀರ್ವರ
ವರದಿ ಮೂರ್ಖನ್ರಸುರ ಬಾಧಿಸೆ
ಹರಿವರರ ದಂಡೆತ್ತೆ ಬಹುಮುಖ
ದುರುಳನ ಶಿರ ತರಿದವನ ಪ್ರಿಯೆ ।೨।
ಅಜಮನಸಿಜಜನನಿ ಅಂಬುಜಪಾಣಿ
ಭುಜಗಸನ್ನಿಭವೇಣಿ ನಿತ್ಯಕಲ್ಯಾಣಿ
ಕುಜನಮರ್ದನ **ವಿಜಯವಿಠಲನ**
ಭಜಿಸಿಪಾಡುವ ಭಕ್ತಕೂಟವ
ನಿಜದಿ ಸಲಹುವೆನೆಂಬ ಬಿರುದುಳ್ಳ
ವಿಜಯಸಾರಥಿ ವಿಶ್ವಂಭರಪ್ರಿಯೆ ।೩।

ರಾಗ – ತೋಡಿ      ತಾಳ – ಆದಿತಾಳ

ಕ್ಷೀರವಾರಿಧಿಕನ್ನಿಕೆ ಮಾರಜನಕೆ –
ಈರೇಳು ಲೋಕನಾಯಿಕೆ । ಪ ।
ವಾರವಾರಕೆ ನಿನ್ನಾರಾಧಿಪುದಕೆ ಚಾರುಮನಸು
ಕೊಡು ದೂರ ನೋಡದಲೆ । ಅ ।
ಶ್ರೀಧರಾ ದುರ್ಗಾ ಅಂಭೃಣಿ ನಿತ್ಯಕಲ್ಯಾಣಿ
ವೇದಗತಿಯೆ ರುಗ್ಮಿಣಿವೇದವೇದಾಂತದಭಿಮಾನಿ
ವಾರಿಜಪಾಣಿ ಆದಿಮಧ್ಯಾಂತಗುಣಶ್ರೇಣಿ
ಸಾಧುಜನರ ಹೃದಯಾಬ್ಜವಿರಾಜಿತೆ
ಖೇದಗೊಳಿಪ ಕಾಮಕ್ರೋಧಗಳೋಡಿಸಿ
ನೀದಯದಲಿ ಮೇಲಾದಗತಿಗೆ ಪಂಚಭೇದಮತಿಯ
ಕೊಡು ಮಾಧವಪ್ರಿಯಳೆ ।೧।
ಶ್ರೀಮಾಯಾಜಯಾಕೃತಿಶಾಂತಿ
ದೇವಿಜಯಂತಿ ನಾಮದಲಿಪ್ಪ ಜಯವಂತಿ
ಕೋಮಲವಾದ ವೈಜಯಂತಿ ಧರಿಸಿದ
ಶಾಂತಿ ಸೋಮಾರ್ಕಕೋಟಿ ಮಿಗೆ ಕಾಂತಿ
ತಾಮರಸಾಂಬಿಕೆ ರಾಮೆ ಲಕುಮಿ
ಸತ್ಯಭಾಮೆ ಭವಾರಣ್ಯಧೂಮಕೇತಳೆ
ಯಾಮಯಾಮಕೆ ಹರಿನಾಮವ
ನುಡಿಸೂತ್ತಮರೊಡನೆ ಪರಿಣಾಮವ ನೀವುದು ।೨।
ನಾನಾಭರಣಭೂಷಿತೆ ಧಾರಿಣಿಜಾತೆ ಜ್ಞಾನಿಗಳ ಮನ:ಪ್ರೀತೆ
ಅನಾದಿಯಿಂದ ಪ್ರಖ್ಯಾತೆ ಆದಿದೇವತೆ ಗಾನವಿಲೋಲೆಸುರಗೀತೆ

ನೀನೇ ಗತಿ ಎನಗಾರೊಬ್ಬರ ಕಾಣೆ
ದಾನಿ ಇಂದಿರಾದೇವಿ ನಾನಾ ಪರಿಯಲಿ
ಶ್ರೀನಿಧಿ ವಿಜಯವಿಠಲನ ಮೂರುತಿಯನ್ನು
ಧ್ಯಾನದೊಳಿಡುವಂತೆ ಜ್ಞಾನಭುಕುತಿಕೊಡೆ । ೩ ।

---

ರಾಗ – ಪೀಲು ತಾಳ – ಆದಿತಾಳ
ಬಾರಮ್ಮ ಬಾರೆ ಇಂದಿರೆ । ಪ ।
ಹಾರೈಸುತಲಿಹೆ ನೀರಜನಿಲಯೇ । ಅ.ಪ ।
ಬಾರೆನ್ನಯ ಭವನಕೆ ಭಾಗ್ಯದನಿಧಿ
ಪೂರಗೊಳಿಸೆ ಮನಕೋರಿಕೆಗಳನು । ೧ ।
ಕೊಳಲೂದುವ ಗೋವಳನಿಲ್ಲಿರುವನು
ಥಳಿನಗುವೊಗದಲಿ ಬೆಳಗೆಲೆ ಭವನವ । ೨ ।
ಚೆನ್ನದ ಹೊಗೆಯಾಡಿಸೆ ಈ ಮಂದಿರ
ನಿನ್ನದೇ ಭಕುತ **ಪ್ರಸನ್ನ**ನ ಪ್ರಿಯಳೆ । ೩ ।
(ವಿದ್ಯಾಪ್ರಸನ್ನತೀರ್ಥರ ರಚನೆ)

---

ರಾಗ – ನಾಟಿ ತಾಳ – ಆದಿತಾಳ
ಕಮಲಾಂ ಕಮಲಾಸನಮುಖ
ದಿವಿಜಸುನುತ ಪದಯುಗಳಾಮ್ । ಪ ।
ವಿಮಲಾಂ ಮತಿಮನಿಶಮ್ ।
ಯದಿ ವಾಂಛಸಿ ಜಗದೀಶೇ ಸಂಸ್ಮರ । ಅ ।

ಇಂದುಗಣಸಮಸುವದನಾಮ್ ।
ಇಂದೀವರನಿಭನಯನಾಮ್ ।
ಮಂದಸ್ಮಿತ ರುಚಿರಾಧರಪಲ್ಲವ ।
ದ್ವಂದ್ವವಿನುತ ಸುಂದರಹರಿಲೀಲಾಮ್ ।೧।
ಕ್ಷೀರಶರಧಿ ವರ ತನಯಾಮ್ ।
ನೀರಜಗಣಕೃತನಿಲಯಾಮ್ ।
ಚಾರುನಯನಕೃತ ನೀರಾಜನದ್ಯುತಿ ।
ಪೂರಿತ ಶ್ರೀಹರಿಪ್ರಿಯಜಾಯಾಮ್ ।೨।
ಹರಿಣಾಸಹಭುವಿಕೃತಲೀಲಾಮ್ ।
ಶರಣಾಗತ ಪೋಷಣಶೀಲಾಮ್ ।
ಸ್ಮರಸತತಂ ಪ್ರಣತಜನ **ಪ್ರಸನ್ನಾಮ್** ।
ಯದಿ ವಾಂಛಸಿ ಪರತರಸುಖಮಾಪ್ತುಮ್ ।೩।
(ವಿದ್ಯಾಪ್ರಸನ್ನತೀರ್ಥರ ರಚನೆ)

---

ರಾಗ – ಪೀಲು – ಝುಂಪೆತಾಳ

ಕವಳ ತಾಯಿ ಕವಳ ಅಮ್ಮ । ಪ ।
ಪಾಪಿ ಪರದೇಶಿಯ ಮರಿಬೇಡಿರಮ್ಮ । ಅ ।
ಸಂಜೆಯ ಕವಳಕ್ಕೆ ಸಾವಿರ ಆಪತ್ತು ।
ಅಂಜಿ ಓಡುವುದೆಂದು ಕೇಳಿಲ್ಲವೇನಮ್ಮ ।
ಭುಂಜಿಸಿ ನಿಮ್ಮಯ ಪತಿಯ ಪ್ರಸಾದದ ।
ಎಂಜಲು ಎನಗಿಷ್ಟು ಜೋಳಿಗೆಗಿಕ್ಕವ್ವ ।೧।
ನಮದೊಂದು ಸಂಸಾರ ಬಲು ದೊಡ್ಡದವ್ವ ।

ಶ್ರಮಿಸುವರದರೊಳಗಿಬ್ಬರಿಲ್ಲವ್ವ ।
ಕಮಲವ್ವ ನಿಮ್ಮಯ ಅಮೃತಹಸ್ತಕ ಕವಳ ।
ಎಮಗೊಂದು ಕ್ಷಣದಲಿ ಅಮೃತವಾಗೋದವ್ವ । ೨ ।
ಮಿತಿಯಿಲ್ಲದೈಶ್ವರ್ಯ ನಿಮಗಿಹುದೆಂದು
ಕ್ಷಿತಿಯೊಳು ಜ್ಞಾನಿಗಳಾಡುತಲಿಹರು ।
ಅತುಲಮಹಿಮ ನಿಮ್ಮ ಪತಿಯ ಪ್ರಸಾದವ ।
ಪ್ರತಿದಿನವಿತ್ತು **ಪ್ರಸನ್ನ**ರಾಗಿರವ್ವ । ೩ ।
(ವಿದ್ಯಾಪ್ರಸನ್ನತೀರ್ಥರ ರಚನೆ)

**ಕೃಷ್ಣಾರ್ಪಣಮಸ್ತು**

ಸಂಗ್ರಹ – ನರಹರಿ ಸುಮಧ್ವ
www.sumadhwaseva.com
Email – Naraharisumadhwa@yahoo.in
Phone no 9916904341